ವ್ಹಿ. ಎಸ್. ಬಡಿಗೇರ*

# ಬಸವನ-ಬಾಗೇವಾಡಿ ತಾಲೂಕಿನಲ್ಲಿಯ ಪುರಾತತ್ವ ಅವಶೇಷಗಳು ಒಂದು ವರದಿ

ವಿಜಾಪೂರ ಜಿಲ್ಲೆಯ ಬಸವನ-ಬಾಗೇವಾಡಿ ತಾಲೂಕು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಸ್ಥಳವಾಗಿದೆ. ಕ್ರಿ.ಶ. ೧೩ನೇ ಶತಮಾನದ ಪೂರ್ವಾರ್ಧಿಯಲ್ಲಿ ಬಸವನ-ಬಾಗೇವಾಡಿಯು ಒಂದು ಮಹಾಗ್ರಹಾರವಾಗಿತ್ತು. ಕ್ರಿ.ಶ. ೧೨ನೇ ಶತಮಾನದಲ್ಲಿ ಜೀವಿಸಿದ್ದ ಬಸವಣ್ಣನವರಿಂದ ಇದೊಂದು ವೀರಶೈವ ಧಾರ್ಮಿಕ ಕ್ಷೇತ್ರವಾಯಿತು.

ಈಗಿರುವ ಬಸವನ-ಬಾಗೇವಾಡಿ ತಾಲೂಕವು ೧೨೦ ಹಳ್ಳಿಗಳನ್ನೊಳಗೊಂಡ ವಿಶಾಲವಾದ ಪ್ರದೇಶ. ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚುರಿಗಳು ಮತ್ತು ಯಾದವರ ಕಾಲದಲ್ಲಿ "ತರ್ದವಾಡಿ ಸಾಸಿರ"ವೆಂದು ಪ್ರಸಿದ್ಧವಾದ ಇಂಡಿ ತಾಲೂಕಿನ ಭೀಮಾ ನದಿಯ ದಕ್ಷಿಣ ದಂಡೆಯ ಮೇಲಿರುವ ಇಂದಿನ ತದ್ದೇವಾಡಿಯೇ ಅಂದು ಸಾವಿರ ಹಳ್ಳಿಗಳನ್ನೊಳಗೊಂಡ ಆಡಳಿತದ ಕೇಂದ್ರವಾಗಿತ್ತು. ಹಾಗೂ ಆಡಳಿತದ ಅನುಕೂಲಕ್ಕಾಗಿ ೨೧ ಕಂಪಣಗಳನ್ನಾಗಿ ವಿಭಾಗ ಮಾಡಲಾಗಿತ್ತು. ಅವುಗಳಲ್ಲಿ ಮುತ್ತಗಿ ಮೂವತ್ತು, ಹೆಬ್ಬಾಳು ಹನ್ನೆರಡು ಮತ್ತು ತುಂಬದಾರು ಬಾಂಡ, ಇವು ಹೆಸರಿಗೆ ತಕ್ಕಂತೆ ಗ್ರಾಮಗಳನ್ನೊಳಗೊಂಡು ಇಂದಿನ ಬಾಗೇವಾಡಿ ತಾಲೂಕಿನಲ್ಲಿಯ ಪ್ರಮುಖ ಕಂಪಣಗಳಾಗಿದ್ದವು.

ಈ ಹಿಂದೆ ಶೋಧಿಸಿದ ಹಿಪ್ಪರಗಿ ಮತ್ತು ಕೃಷ್ಣಾ ನದಿಯ ದಂಡೆಯ ಮೇಲಿರುವ ಕೊಲ್ಹಾರವು ಆದಿ-ಮಧ್ಯ-ಹಳೆಯ ಶಿಲಾಯುಗದ ನೆಲೆಗಳಾಗಿವೆ. ನನ್ನ ಶೋಧನೆಯಲ್ಲಿ ಬೆಳಕಿಗೆ ಬಂದ ಡೋಣಿ ನದಿಯ ದಕ್ಷಿಣ ದಂಡೆಯ ಮೇಲಿರುವ ಡೋಣೂರು ಬಾಗೇವಾಡಿಯಿಂದ ಒಂಬತ್ತು ಕಿ.ಮೀ. ಉತ್ತರಕ್ಕಿರುವ ಇಂಗಳೇಶ್ವರ ಸೂಕ್ಷ್ಮ ಶಿಲಾಯುಗದ ನೆಲೆಗಳಾಗಿವೆ. ಇಂಗಳೇಶ್ವರ, ಕೊಲ್ಹಾರ, ಚಿಮ್ಮಲಗಿ, ವಡ್ಡವಡಿಗೆ ಮತ್ತು ಹೆಬ್ಬಾಳ ಇವು ಇತಿಹಾಸ ಆರಂಭಕಾಲದ ನೆಲೆಗಳಾಗಿವೆ ಮತ್ತು ಇನ್ನುಳಿದವು (ಕೆಲವನ್ನು ಬಿಟ್ಟು) ಮಧ್ಯಯುಗೀನ ಇತಿಹಾಸ ಕಾಲದ ನೆಲೆಗಳಾಗಿವೆ.

ಈ ತಾಲೂಕಿನಲ್ಲಿ ಈವರೆಗೆ ೨೭ ಹಳ್ಳಿಗಳಲ್ಲಿ ೮೪ ಶಾಸನಗಳು ದೊರೆತಿವೆ. ಅವುಗಳಲ್ಲಿ ಎರಡು ಅಪ್ರಕಟಿತ, ಪ್ರಕಟಗೊಂಡ ಎಲ್ಲ ಶಾಸನಗಳು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚುರಿ, ಮತ್ತು ಯಾದವ ಅರಸರ ರಾಣಿಯರ, ರಾಜಕುಮಾರರ, ಅಧಿಕಾರಿಗಳ ಮತ್ತು ಪ್ರಮುಖ ವ್ಯಕ್ತಿಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಧಾರ್ಮಿಕವಾಗಿ ಇಂಗಳೇಶ್ವರ, ಮನಗೂಳಿ, ಸಾಲವಾಡಿಗೆ ಪ್ರಮುಖ ಜೈನ ಧರ್ಮದ ಕೇಂದ್ರಗಳಾಗಿದ್ದವು. ಮುತ್ತಗಿ, ಇಂಗಳೇಶ್ವರ, ಮನಗೂಳಿ ಮೊದಲಾದವುಗಳು ಶೈವ ಧರ್ಮದ ಕೇಂದ್ರಗಳು. ಪಾಶುಪತ

* ಎಂ. ಫಿಲ್. ವಿದ್ಯಾರ್ಥಿ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ.ವಿ. ಧಾರವಾಡ-೫೮೦ ೦೦೩

ಕಾಳಾಮುಖ ಪಂಥಕ್ಕೆ ಸಂಬಂಧಿಸಿದಂತೆ ಮುತ್ತಗಿಯಲ್ಲಿ ಶಕ್ತಿ ಪರ್ಷೆಯು ಮತ್ತು ಮನಗೂಳಿ ಇಂಗಳೇಶ್ವರದಲ್ಲಿ ಸಿಂಹ ಪರ್ಷೆಯು ಸ್ಥಾನಾಚಾರ್ಯರ ಗುರು ಪರಂಪರೆ ಬೆಳೆದು ಬಂದ ಬಗ್ಗೆ ಅಲ್ಲಿಯ ಶಾಸನಗಳು ಉಲ್ಲೇಖಿಸುತ್ತವೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತೆ ಹೂವಿನ-ಹಿಪ್ಪರಗಿ, ಬಾಗೇವಾಡಿ, ಮನಗೂಳಿ, ಇಂಗಳೇಶ್ವರ, ಕೊಲ್ಹಾರ ಇವೆಲ್ಲವು ಮಹದಗ್ರಹಾರಗಳಾಗಿದ್ದವು. ಅಲ್ಲಿಯ ಮಹಾಜನರು ಯಜನ-ಯಾಜನ, ಅಧ್ಯಯನ-ಅಧ್ಯಾಪನದೊಂದಿಗೆ ಆಡಳಿತ ನೋಡಿಕೊಳ್ಳುತ್ತಿದ್ದರು. ಸಾಮಾಜಿಕವಾಗಿ, ಪ್ರಭುವರ್ಗ, ಮಹಾಜನರು, ಸ್ಥಾನಾಚಾರ್ಯರು, ಜಿನಮುನಿಗಳು, ಶ್ರಮಿಕವರ್ಗದವರು, ಸಮಾಜದಲ್ಲಿ ವಾಸವಾಗಿದ್ದರು. ಅಲ್ಲಿಯ ವರ್ತಕರು ಅವರ ಸಂಘ ಸಂಸ್ಥೆಗಳಾದ ಐಹೊಳೆಯ ಐನೂರು ಸ್ವಾಮಿಗಳು, ದೇಡರ ಸೆಣಿಗ ಕೊತ್ತಳಗಳು, ಸಾಲಿನ ಮುನ್ನೂರ್ವರು, ತಂಬುಲಿಗ ಸಾಸಿರ್ವರು ಮೊದಲಾದವು ಉತ್ಪಾದನೆ, ವಿತರಣೆಯಲ್ಲಿ ತೊಡಗಿದ್ದವು. ಕಲೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ವಾಸ್ತು-ಮೂರ್ತಿಶಿಲ್ಪಗಳ ನಿರ್ಮಾಣ, ಕವಿ ಮತ್ತು ಲಿಪಿಕಾರರಿಂದ ಶಾಸನಗಳ ಪಾಠ ರಚನೆ, ಅಗ್ಗಳ ಕವಿಯ ಚಂದ್ರಪ್ರಭ ಪುರಾಣ ಇವೆಲ್ಲ ಪ್ರಮುಖವಾದವು.

ಹೀಗೆ ಸಾಂಸ್ಕೃತಿಕವಾಗಿ ಅಭಿವೃದ್ಧಿ ಹೊಂದಿದ ಈ ಪ್ರದೇಶದಲ್ಲಿ ೧೮ ಹಳ್ಳಿಗಳಲ್ಲಿ ಕ್ಷೇತ್ರ ಕಾರ್ಯ ಕೈಗೊಂಡಿದ್ದು ಅವುಗಳಲ್ಲಿ ಕೆಲವು ಹಳ್ಳಿಗಳಲ್ಲಿ ದೊರೆತ ಪುರಾತತ್ವ ಅವಶೇಷಗಳು ಈ ರೀತಿಯಾಗಿವೆ : ೧) ಸೂಕ್ಷ್ಮ ಶಿಲಾಯುಗದ ನೆಲೆಗಳು, ೨) ಇತಿಹಾಸ ಆರಂಭ ಮತ್ತು ಮಧ್ಯಯುಗೀನ ಕಾಲದ ನೆಲೆಗಳು ೩) ಪ್ರಾಚೀನ ದೇವಾಲಯಗಳು ಮತ್ತು ೪) ಮೂರ್ತಿ-ಶಿಲ್ಪಗಳು.

### ೧. ಸೂಕ್ಷ್ಮ ಶಿಲಾಯುಗದ ನೆಲೆಗಳು :

ಇಂಗಳೇಶ್ವರ ಗ್ರಾಮ (ಬಾಗೇವಾಡಿ ತಾಲೂಕ) ದಿಂದ ದಕ್ಷಿಣಕ್ಕೆ ಒಂದು ಕಿ.ಮೀ. ದೂರದಲ್ಲಿ ಗುಡ್ಡವಿದೆ. ಗುಡ್ಡದ ಈಶಾನ್ಯ ಭಾಗದಲ್ಲಿ ಬೆಣಚುಕಲ್ಲು ಹರಡಿದೆ. ಈ ಕಲ್ಲಿನಲ್ಲಿ ತಯಾರಿಸಿದ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಈಗಿರುವ ಇಂಗಳೇಶ್ವರ ಗ್ರಾಮ ಮತ್ತು ಗುಡ್ಡದ ಮಧ್ಯದ ಪ್ರದೇಶದಲ್ಲಿ ಹರಡಿವೆ. ಸಪೂರ ನೀಳವಾದ ಚಕ್ಕೆಗಳು, ಕೆರೆಯುವ ಉಪಕರಣಗಳು, ಮೊನೆಗಳು, ತ್ರಿಕೋನಾಕೃತಿಯ ಬಾಣದ ಮೊನೆಗಳು, ಮೊದಲಾದ ವಿವಿಧ ಆಯುಧಗಳು ದೊರೆಯುತ್ತವೆ. ಈ ಗುಡ್ಡದಲ್ಲಿ ಬೆಣಚುಕಲ್ಲು ಸಹಜವಾಗಿ ದೊರೆಯುವುದರಿಂದ ಹಾಗೂ ಉಪಕರಣಗಳನ್ನು ತೆಗೆದ ಉಳಿದ ಪಟ್ಟಿ ಪಟ್ಟಿಕೆಯ ಶಿಲೆಗಳು ಬಹಳಷ್ಟು ಹರಡಿರುವುದರಿಂದ ಇದೊಂದು ಸೂಕ್ಷ್ಮಶಿಲಾಯುಗದ ಉಪಕರಣಗಳನ್ನು ತಯಾರಿಸುವ ಕಾರ್ಯಾಗಾರವಾಗಿತ್ತೆಂದು ಹೇಳಬಹುದು. ಈ ಗುಡ್ಡದ ದಕ್ಷಿಣ ಭಾಗದಲ್ಲಿ ಅಂದರೆ ಇಂಗಳೇಶ್ವರದಿಂದ ದಕ್ಷಿಣಕ್ಕೆ ಎರಡು ಕಿ.ಮೀ. ದೂರದಲ್ಲಿ ಬಾಗೇವಾಡಿಗೆ ಹೋಗುವ ರಸ್ತೆಯ ಎಡ-ಬಲ ಭಾಗಗಳಲ್ಲಿ ಸೂಕ್ಷ್ಮಶಿಲಾಯುಗದ ಉಪಕರಣಗಳು ಹರಡಿದ ನೆಲೆಗಳಿವೆ. ಪ್ರತಿಯೊಂದು ನೆಲೆಯು ಸು. ಎರಡು ಎಕರೆ ಪ್ರವೇಶವಿದ್ದು ಈ ಮೇಲೆ ಹೇಳಿದ ಆಯುಧಗಳು ಕಂಡು ಬರುತ್ತವೆ. ಡೋಣಿ ನದಿಯ ದಂಡೆಯಲ್ಲಿರುವ ಡೋಣೂರು ಮತ್ತು ಸುತ್ತ ಮುತ್ತ ಸೂಕ್ಷ್ಮಶಿಲಾಯುಗದ ಉಪಕರಣಗಳು ದೊರೆಯುತ್ತವೆ.

### ೨. ಆರಂಭ ಮತ್ತು ಮಧ್ಯಯುಗೀನ ಇತಿಹಾಸ ಕಾಲದ ನೆಲೆಗಳು :

ಈ ತಾಲೂಕಿನ ಇಂಗಳೇಶ್ವರ, ಕೊಲ್ಹಾರ, ಚಿಮ್ಮಲಗಿ, ವಡ್ಡವಡಿಗೆ, ಹೆಬ್ಬಾಳ ಗ್ರಾಮಗಳು ಆರಂಭ ಮತ್ತು ಮಧ್ಯಯುಗೀನ ಇತಿಹಾಸ ಕಾಲದ ನೆಲೆಗಳಾಗಿವೆ. ಬಾಗೇವಾಡಿ, ಮುತ್ತಗಿ, ಮನಗೂಳಿ, ವಂದಾಲ, ಹೂವಿನ-ಹಿಪ್ಪರಿಗಿ, ಇವು ಮಧ್ಯಯುಗೀನ ಕಾಲದ ನೆಲೆಗಳಾಗಿವೆ. ಈ ಎಲ್ಲ ಪ್ರದೇಶಗಳಲ್ಲಿ ಹಾಳು ಮಣ್ಣು, ಗೋಡೆಯ ತಳಪಾಯ, ಮಡಿಕೆಯ ಚೂರು, ಬಳೆಚೂರು, ಮೊದಲಾದ ಪುರಾತತ್ವ ಅವಶೇಷಗಳು ಕಂಡುಬರುತ್ತವೆ.

### ೩. ದೇವಾಲಯಗಳು

ಶೈವ-ವೈಷ್ಣವ ದೇವಾಲಯಗಳು ಇಂಗಳೇಶ್ವರದಲ್ಲಿ ಸೋಭಾನ ದೇವರು, ಸೋಮನಾಥ, ಕಲ್ಮೇಶ್ವರ, ನಾರಾಯಣ ; ಬಾಗೇವಾಡಿಯಲ್ಲಿ ಸಂಗಮೇಶ್ವರ, ಈಶ್ವರ ; ಮುತ್ತಗಿಯಲ್ಲಿ ಮುಕ್ತೇಶ್ವರ, ಲಕ್ಷ್ಮಿ-ನಾರಾಯಣ, ಸಂಗಮೇಶ್ವರ, ಈಶ್ವರ, ಕಲ್ಮೇಶ್ವರ ; ಮನಗೂಳಿಯಲ್ಲಿ ರಾಮೇಶ್ವರ ; ವಡ್ಡವಡಿಗಿಯಲ್ಲಿ ಸಂಗಮೇಶ್ವರ ; ಹೂವಿನ-ಹಿಪ್ಪರಗಿಯಲ್ಲಿ ಕಲ್ಮೇಶ್ವರ ;

ಹೆಬ್ಬಾಳದಲ್ಲಿ ಮಹದೇವ, ರಾಮಲಿಂಗ, ಈಶ್ವರ ದೇವಾಲಯಗಳು ಕಂಡು ಬರುತ್ತವೆ.

ಹೆಬ್ಬಾಳದಲ್ಲಿ ರಾಮಲಿಂಗ ದೇವಾಲಯದ ದಕ್ಷಿಣ ಭಾಗದಲ್ಲಿ ಉತ್ತರಕ್ಕೆ ಮುಖ ಮಾಡಿ ನಿರ್ಮಿತವಾದ ಹಳೆಯ ಕಾಲದ ದೇವಾಲಯವಿದೆ. ಮುಂದಿನ ಭಾಗ ಹಾಳಾಗಿದ್ದು ಸಭಾ ಮಂಟಪ, ಗರ್ಭಗೃಹ ಮಾತ್ರ ಇವೆ. ಸಭಾ ಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಕಂಬಗಳಿವೆ. ಗರ್ಭಗೃಹದಲ್ಲಿ ಯಾವುದೇ ಮೂರ್ತಿ ಇರುವುದಿಲ್ಲ. ಇದನ್ನು ಈಗ ಉಗ್ರಾಣ ಮಳಿಗೆ ಎಂದು ಸ್ಥಳೀಯ ಜನರು ಕರೆಯುತ್ತಾರೆ.

### ೪. ಮೂರ್ತಿ ಶಿಲ್ಪಗಳು

ಮೇಲೆ ಹೇಳಿದ ಎಲ್ಲ ಗ್ರಾಮಗಳಲ್ಲಿ ಜಿನಮೂರ್ತಿಗಳು, ಈಶ್ವರ ಲಿಂಗಗಳು, ವೀರಭದ್ರ, ಉಮಾ-ಮಹೇಶ್ವರ, ನಂದಿ, ಗಣೇಶ, ಕಾಳಿಕಾ, ಲಕ್ಷ್ಮಿ ನಾರಾಯಣ, ಲಕ್ಷ್ಮಿವಿಷ್ಣು, ಅನಂತಶಯನ, ನಾರಾಯಣ, ಸಪ್ತಮಾತೃಕೆಯರು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ನಿಸದಿಗಲ್ಲುಗಳು ಮೊದಲಾದ ಮೂರ್ತಿಶಿಲ್ಪಗಳು ಕಂಡು ಬರುತ್ತವೆ.

### ಉಮಾ-ಮಹೇಶ್ವರ, ಲಕ್ಷ್ಮಿ-ವಿಷ್ಣು ಮೂರ್ತಿಗಳು

ವಡ್ಡವಡಿಗಿಯ ಸಂಗಮೇಶ್ವರ ದೇವಾಲಯದ ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಪೀಠದ ಮೇಲೆ ಬಲಭಾಗ ಉಮಾ-ಮಹೇಶ್ವರ, ಎಡಭಾಗ ಲಕ್ಷ್ಮಿ ವಿಷ್ಣುವಿನ ಮೂರ್ತಿಗಳಿವೆ. ಮಧ್ಯದಲ್ಲಿ ಈಗ ಪ್ರತಿಷ್ಠಾಪಿಸಿದ ಒಂದು ಲಿಂಗವಿದೆ. ಈಗ ಲಿಂಗವಿರುವ ಸ್ಥಳದಲ್ಲಿ ಹಿಂದೆ ಬ್ರಹ್ಮನ ಮೂರ್ತಿ ಇದ್ದಿರಬಹುದು. ಹಾಗಿದ್ದಲ್ಲಿ ಇದು ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳ ದೇವಾಲಯವೆಂದು ಸ್ಪಷ್ಟವಾಗುತ್ತದೆ.

### ನೇಮಿನಾಥನ ಮೂರ್ತಿ

ಇಂಗಳೇಶ್ವರದ ಗುಡ್ಡದ ಗವಿಯಲ್ಲಿರುವ ಈ ಮೂರ್ತಿಗೆ ರೇವಣಸಿದ್ಧ ಎಂದು ಸ್ಥಳೀಯ ಜನರು ಕರೆಯುತ್ತಾರೆ. ನಾಲ್ಕು ಅಡಿ ಎತ್ತರ ಮೇಲೆ ಏಳು ಹೆಡೆಗಳುಳ್ಳ ಸರ್ಪ, ಜಟಾಮುಕುಟ, ಕೊರಳ, ಕಿವಿ ಆಭರಣಗಳು, ಪದ್ಮಾಸನ, ಯೋಗ ಮುದ್ರೆ, ಎರಡೂ ಕೈಗಳಿಗೆ ಸರ್ಪಗಳು ಸುತ್ತಿಕೊಂಡಿರುವ ಇದು ಜೈನ ನೇಮಿನಾಥನ ಮೂರ್ತಿ ಎಂದು ಸ್ಪಷ್ಟವಾಗುವುದು.*

## ಆಧಾರ ಗ್ರಂಥಗಳು


೧. ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತ ಪುರಾತತ್ವ ಅವಶೇಷಗಳು

೨. ಎಪಿಗ್ರಾಫಿಯ ಇಂಡಿಕಾ ಸಂಪುಟ-೫ ; ೧೮೯೮-೯೯, ೧೯೬೦.

೩. ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ : ಸಂಪುಟ ೧೧, ೧೯೪೦, ಸಂ. ೧೫, ೧೯೬೫.

೪. ಗೆಜೆಟೀಯರ್ ಆಫ್ ಇಂಡಿಯಾ ಮೈಸೂರು ಸ್ಟೇಟ್ ಬಿಜಾಪೂರ ಡಿಸ್ಟ್ರಿಕ್ಟ್ ೧೯೬೬, ಬೆಂಗಳೂರು.

೫. ಇಂಡಿಯನ್ ಆರ್ಕೀಯಾಲಜಿ ರಿವ್ಯೂ ಪು-೨೩, ೧೯೬೩-೬೪

೬. ಗುರವ, ಆರ್.ಎನ್., ತರ್ದವಾಡಿನಾಡು : ೧೯೭೯

೭. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು ಒಂದು ಅಧ್ಯಯನ ೧೯೯೦ ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೮. ಶಿರಹಟ್ಟಿ ಲ.ಅ., ಬಸವನ-ಬಾಗೇವಾಡಿಯ ಕ್ಷೇತ್ರ ದರ್ಶನ ೧೯೭೪

೯. ದಯಾನಂದ ಎಸ್., ಶ್ರೀ ಕ್ಷೇತ್ರ ಬಸವನ ಬಾಗೇವಾಡಿ ೧೯೮೮ ಬಸವಪಥ ಸಂಪುಟ-೧೦, ಸಂಚಿಕೆ-೯


* ಈವರ್ಣನೆಯಿಂದ ಇದು ಶೈವ ಧರ್ಮದ ದೇವತಾಮೂರ್ತಿ ಎಂಬುದು ಸ್ಪಷ್ಟ, ನೇಮಿನಾಥನದಲ್ಲ, ತೀರ್ಥಂಕರರು ನಿರಾಭರಣರು. (ಸಂ).